ಎಂ. ಬಿ. ಪಾಟೀಲ

# ಧಾರವಾಡ ಜಿಲ್ಲೆಯಲ್ಲಿ ಆಧುನಿಕ ಬ್ಯಾಂಕಿಂಗ್ ಉದ್ಯಮದ ಮೊದಲನೆಯ ಹಂತ (೧೮೬೩-೧೯೪೯)

ಕರ್ನಾಟಕವನ್ನೊಳಗೊಂಡಂತೆ ಭಾರತದಲ್ಲಿನ ಬ್ರಿಟಿಷ ಮಾದರಿಯ ಬ್ಯಾಂಕಿಂಗ್ ಉದ್ಯಮಕ್ಕೆ ಸುಮಾರು ೧೨೫ ವರ್ಷಗಳ ಸುದೀರ್ಘ, ರಮ್ಯ ಚರಿತ್ರೆ ಇದೆ. ಬ್ರಿಟಿಷ ಮಾದರಿಯ ಬ್ಯಾಂಕಿಂಗ್ ವ್ಯವಸ್ಥೆ ೧೮೦೬ ರಿಂದ ೧೮೪೩ರ ಅವಧಿಯಲ್ಲಿ ಕಲಕತ್ತ, ಬೊಂಬಾಯಿ, ಮದ್ರಾಸ ನಗರಗಳಲ್ಲಿ ಅನುಕ್ರಮವಾಗಿ ೧೮೦೬, ೧೮೪೦, ೧೮೪೩ ರಲ್ಲಿ ಪ್ರೆಸಿಡೆನ್ಸಿ (presidency) ಬಾಂಕುಗಳನ್ನು ಪ್ರಾರಂಭಿಸುವುದರೊಂದಿಗೆ ಬೀಜಾಂಕುರವಾಯಿತು.

ಉತ್ತರ ಭಾರತದಲ್ಲಿ ೧೮೬೫ರ ಸುಮಾರಿಗೆ ಖಾಸಗಿ ವಲಯದ ಬ್ಯಾಂಕುಗಳು ಪ್ರಾರಂಭವಾದರೆ, ಕರ್ನಾಟಕದಲ್ಲಿ ಖಾಸಗಿ ವಲಯದ ಪ್ರಪ್ರಥಮ ಎರಡು ಬ್ಯಾಂಕುಗಳು ೧೮೬೮ ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾದವು : ಬೆಂಗಳೂರು ಬ್ಯಾಂಕ್ (ಲಿ.) ಮತ್ತು ಮೈಸೂರು ಬ್ಯಾಂಕ್ ಕಾರ್ಪೊರೇಷನ್ (ಲಿ.). ಲಭ್ಯ ಇರುವ ದಾಖಲೆಗಳ ಪ್ರಕಾರ, ಇವು ಕರ್ನಾಟಕದಲ್ಲಿ ಪ್ರಾರಂಭಿಸಲ್ಪಟ್ಟ ಪ್ರಪ್ರಥಮ ಖಾಸಗಿ ವಲಯದ ವಾಣಿಜ್ಯ ಬ್ಯಾಂಕುಗಳು ಎಂದು ಹೇಳಬಹುದು. ಅಂದಿನ ಅವುಗಳ ಷೇರು ಬಂಡವಾಳ ಅನುಕ್ರಮವಾಗಿ ರೂ. ೭ ಲಕ್ಷ ಮತ್ತು ರೂ. ೨ ಲಕ್ಷ ಆಗಿತ್ತು. ಅಂದಿನ ಕಾಲದಲ್ಲಿ ಅದು ಬಹು ದೊಡ್ಡ ಷೇರು ಬಂಡವಾಳ ಆಗಿತ್ತು ಎಂದು ಹೇಳಬಹುದು.

ಕರ್ನಾಟಕದ ಮಟ್ಟಿಗೆ ವಾಣಿಜ್ಯ ಬ್ಯಾಂಕಿಂಗ್ ಉದ್ಯಮದ ಹುಟ್ಟು ಮತ್ತು ಬೆಳವಣಿಗೆಯನ್ನು ಹೇಳುವುದಾದರೆ, ಧಾರವಾಡದಲ್ಲಿ ೧೮೬೩ರಲ್ಲಿ ಪ್ರಾರಂಭಿಸಲಾದ ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕಿನ ಶಾಖೆಯೇ ಕರ್ನಾಟಕದ ಪ್ರಥಮ ವಾಣಿಜ್ಯ ಬ್ಯಾಂಕಿನ ಶಾಖೆ ಎಂದು ಖಚಿತವಾಗಿ ಹೇಳಬಹುದು. ತದನಂತರದ ವರ್ಷಗಳಲ್ಲಿ ಬೆಂಗಳೂರಿನಲ್ಲಿ (೧೮೬೫), ಮಂಗಳೂರಿನಲ್ಲಿ (೧೮೬೮) ರಲ್ಲಿ, ಮದ್ರಾಸ್ ಬ್ಯಾಂಕಿನ ಶಾಖೆಗಳು ಪ್ರಾರಂಭವಾದವು. ಇದಕ್ಕೂ ಪೂರ್ವದಲ್ಲಿ ಬೆಳಗಾವಿಯಲ್ಲಿ (೧೮೬೭), ನಂತರ ಹುಬ್ಬಳ್ಳಿಯಲ್ಲಿ (೧೮೭೦) ಬೊಂಬಾಯಿ ಬ್ಯಾಂಕಿನ ಶಾಖೆಗಳು ತೆರೆಯಲ್ಪಟ್ಟವು. ಆದರೆ ಧಾರವಾಡದ ಶಾಖೆಯು ಬಹಳ ಕಾಲದವರೆಗೆ ವ್ಯವಹಾರವನ್ನು ಮುಂದುವರೆಸಲಿಲ್ಲ. ೧೫ ವರ್ಷಗಳ ಸೇವೆಯ ನಂತರ ೧೮೭೮ ರಲ್ಲಿ ಅದನ್ನು ಮುಚ್ಚಿ ಅದರ ವ್ಯವಹಾರವನ್ನು ಜಿಲ್ಲೆಯ ಪ್ರಮುಖ ವ್ಯಾಪಾರಿ ಕೇಂದ್ರವಾದ ಹುಬ್ಬಳ್ಳಿಗೆ ವರ್ಗಾಯಿಸಲಾಯಿತು.

**ಹತ್ತಿಯ ವ್ಯಾಪಾರ ಮತ್ತು ಬ್ಯಾಂಕಿಂಗ್ :** ಬೊಂಬಾಯಿ ಕರ್ನಾಟಕದಲ್ಲಿ ಬ್ಯಾಂಕಿಂಗ್ ಉದ್ಯಮ ಕರ್ನಾಟಕದ ಇತರೇ ಭಾಗಗಳಿಗಿಂತ ಮೊದಲೇ ರೂಪಗೊಳ್ಳಲು ಈ ಭಾಗದ ಪ್ರಮುಖ ವಾಣಿಜ್ಯ ಬೆಳೆಯಾದ ಹತ್ತಿಯೇ ಮೂಲಕಾರಣ. ೧೮೨೮ ರಿಂದಲೇ ಅಂದಿನ ಬ್ರಿಟಿಷ ಸರಕಾರ ಈ ಭಾಗದ ಹತ್ತಿಯ ವ್ಯಾಪಾರವನ್ನು ಉತ್ತೇಜಿಸಲು ಅನೇಕ ಕ್ರಮಗಳನ್ನು ಕೈಗೊಂಡಿತ್ತು. ೧೮೪೨ ರಿಂದ ಈ ಭಾಗದಲ್ಲೂ ಅಮೇರಿಕೆಯ ಹತ್ತಿಯನ್ನು ಬೆಳೆಯುವ ಪ್ರಯೋಗಗಳನ್ನು ಮಾಡಿ ಅದರಲ್ಲಿ ಯಶಸ್ಸು ಸಾಧಿಸಲಾಯಿತು. ಹತ್ತಿಯ ಉದ್ಯಮದ ಬಹುಮುಖ ಅಧ್ಯಯನವನ್ನು ಕುರಿತಂತೆ ೧೮೯೭ರಲ್ಲಿ ಕಾಟನ್ ಕಮೀಶನ್ ನಿಯಮಿಸಲಾಯಿತು. ೧೮೭೩–೧೮೮೩ರ ದಶಕದಲ್ಲಿ ಧಾರವಾಡ ಜಿಲ್ಲೆಯಿಂದ ವಾರ್ಷಿಕ ಸರಾಸರಿ ೯೫೦೦ ಟನ್ (ಬೆಲೆಯಲ್ಲಿ ರೂ. ೪೫ ಲಕ್ಷ) ಹತ್ತಿ ಇಲ್ಲಿಂದ ಬೊಂಬಾಯಿಗೆ ರಫ್ತಾಗುತ್ತಿತ್ತು. ಬೊಂಬಾಯಿ ಮಾರುಕಟ್ಟೆಗೆ ಧಾರವಾಡ ಜಿಲ್ಲೆಯಿಂದ ಶೇ. ೬೮ ಪ್ರಮಾಣದಷ್ಟು ಅಮೇರಿಕನ್ ಹತ್ತಿ ರಫ್ತಾಗುತ್ತಿತ್ತು. ಹುಬ್ಬಳ್ಳಿ

ಧಾರವಾಡಗಳಲ್ಲಿ ಬೊಂಬಾಯಿ ಬ್ಯಾಂಕಿನ ಶಾಖೆಗಳನ್ನು ಪ್ರಾರಂಭಿಸಿದ ಮುಖ್ಯ ಉದ್ದೇಶ ಈ ಭಾಗದ ಹತ್ತಿಯ ವ್ಯಾಪಾರದ ವರ್ತಕರಿಗೆ ಸುಲಭ ದರದಲ್ಲಿ ಹಣಕಾಸಿನ ನೆರವು ಒದಗಿಸುವದಾಗಿತ್ತು. ಅದರಲ್ಲೂ ವಿಶೇಷವಾಗಿ ಮುಂಬಯಿ ವರ್ತಕರ ಹುಂಡಿಯ ವ್ಯಾಪಾರಕ್ಕೆ ಹೆಚ್ಚು ಚಾಲನೆ ಕೊಡುವದೇ ಈ ಬ್ಯಾಂಕಿನ ಉದ್ದೇಶವಾಗಿತ್ತು. ಯುರೋಪದಲ್ಲೂ ವಿಶೇಷ ಬೇಡಿಕೆ ಇದ್ದ ಈ ಹತ್ತಿಗೆ 'ಕುಮಟಾ ಕಾಟನ್'' ಎಂತಲೂ ಕರೆಯುತ್ತಿದ್ದರು.

**ತೇವಣಿದಾರರು :** ಹತ್ತಿಯ ವ್ಯಾಪಾರದಲ್ಲಿ ತೊಡಗಿದ್ದ ಯುರೋಪಿನ ಕಂಪನಿಗಳು ಪ್ರಮುಖ ಠೇವಣಿದಾರರಾಗಿದ್ದರು. ಈ ಕಂಪನಿಗಳ ವಾರ್ಷಿಕ ವ್ಯವಾಟು ೩೦ ರಿಂದ ೪೦ ಲಕ್ಷ ರೂ. ಆಗಿದ್ದರೆ, ಸ್ಥಳೀಯ ಹತ್ತಿಯ ವ್ಯಾಪಾರಿಗಳಾದ ಲಿಂಗಾಯಿತರು, ಜೈನರು, ಬ್ರಾಹ್ಮಣರು, ಕೋಮಟಿಗಳ ವಾರ್ಷಿಕ ವ್ಯವಾಟು ೧೫–೨೦ ಲಕ್ಷ ರೂ. ಗೆ ಹೆಚ್ಚುತ್ತಿರಲಿಲ್ಲ. ಬೊಂಬಾಯಿಯ ಸುಮಾರು ೮–೧೦ ಕಂಪನಿಗಳು ಹುಬ್ಬಳ್ಳಿಯಲ್ಲೂ ಇದ್ದವು. ೧೮೭೬–೭೭ರ ಭೀಕರ ಬರಗಾಲದಲ್ಲಿ ಹುಬ್ಬಳ್ಳಿಯ ಬ್ಯಾಂಕಿನ ವ್ಯವಹಾರ ತುಂಬಾ ತೊಂದರೆಗೆ ಒಳಗಾಯಿತು.

**ಹತ್ತಿಯಿಂದ ಹಣದ ಹೊಳೆ :** ದೇಶದ ಇತರೆಡೆ ಯಂತೆ ೧೮೬೩–೬೫ರ ಅಮೇರಿಕೆಯ ಸಿವಿಲ್ ಯುದ್ಧವು ಈ ಜಿಲ್ಲೆಯ ಬ್ಯಾಂಕಿಂಗ್ ಉದ್ಯಮವೂ ಸೇರಿದಂತೆ ಆರ್ಥಿಕ ಮತ್ತು ಸಾಮಾಜಿಕ ಜೀವನದ ಮೇಲೆ ಬಹು ಆಳವಾದ ಪರಿಣಾಮ ಬೀರಿತು ಎಂದು ಹೇಳಬಹುದು. ಈ ಅವಧಿಯಲ್ಲೂ ಜಿಲ್ಲೆಯಲ್ಲಿ ಹಣದ ಹೊಳೆ ಹರಿ ಯಿತು. ಶ್ರೀಮಂತ ರೈತರು (ಒಕ್ಕಲಿಗರು) ಎತ್ತಿನ ಕೊಂಬುಗಳಿಗೆ ಚಿನ್ನದ ಬಳೆಗಳನ್ನು ತೊಡಿಸುವಷ್ಟು ಹಣದ ಹೊಳೆ ಹರಿಯಿತು ಎಂದು ಹೇಳುವರು. ಕಾರಣ ಹತ್ತಿಗೆ ವಿಪುಲವಾದ ಬೇಡಿಕೆ ಮತ್ತು ಅತ್ಯುತ್ತಮ ಬೆಲೆ ಇತ್ತು. ಈ ಪರಿಸ್ಥಿತಿಯು ಜಿಲ್ಲೆಯಲ್ಲೂ ತಕ್ಕಮಟ್ಟಿಗೆ ಹಣದ ಉಬ್ಬರವನ್ನು (ಇನ್‌ಫ್ಲೇಷನ್) ಉಂಟು ಮಾಡಿತ್ತು. ಇದೇ ಕಾಲಕ್ಕೆ 'ಹತ್ತಿ ಬಿತ್ತಿ ಹಾಳಾದರು' ಎಂಬ ನಾಣ್ನುಡಿ ಪ್ರಚಾರಕ್ಕೆ ಬಂದಿರಬೇಕು. ಈ ಕಾಲ ದಲ್ಲಿ ವಕೀಲರು ಹೆಚ್ಚು ಶ್ರೀಮಂತರಾದರು. ವಕೀಲರ ಸಂಖ್ಯೆ ಜಿಲ್ಲೆಯಲ್ಲೂ ಹೆಚ್ಚಾಯಿತು. ಇದಕ್ಕೆ ಕಾರಣ ಏರುತ್ತಿರುವ ಬೆಲೆಗಳಲ್ಲಿ ಜಮೀನು, ಮನೆ ಮುಂತಾದ ಸ್ಥಿರಾಸ್ತಿಗಳ ಬೆಲೆ ಹೆಚ್ಚಾಗಿ ಅವುಗಳ ವ್ಯವಾಟು ಹೆಚ್ಚಾಗಿ, ತಂಟೆ ತಕರಾರುಗಳು ಹೆಚ್ಚಾದವು. ಹಣದುಬ್ಬರದ ಪರಿಸ್ಥಿತಿಯು ಅಂದು ಬೇಡಿಕೆಗೆ ಅನುಗುಣವಾಗಿ ಕಡಿಮೆ ಪ್ರಮಾಣದಲ್ಲಿದ್ದ ವಕೀಲರಿಗೆ ಹೆಚ್ಚಿನ ಬೇಡಿಕೆಯನ್ನು ಮತ್ತು ಆದಾಯವನ್ನು ತಂದಿತು.

ಈ ಮೇಲಿನ ಅವಧಿಯಲ್ಲೂ ಜನರ ಉಳಿತಾಯವೂ ಹೆಚ್ಚಾಯಿತು. ಆದರೆ ಉಳಿತಾಯ ಮಾಡಿದವರಲ್ಲಿ ಕೆಳವರ್ಗದ ಜನ ತಮ್ಮ ಹೆಚ್ಚಿನ ಗಳಿಕೆ ಯನ್ನು ವಾಡಿಕೆಯಂತೆ ಭೂಮಿಯಲ್ಲಿ ಹೂಳಿ ಇಡುವ ಪ್ರವೃತ್ತಿಯಿಂದ ಕಳೆದುಕೊಂಡರೆ, ಬ್ರಾಹ್ಮಣರ ಉಳಿ ತಾಯದ ಹೆಚ್ಚಿನ ಭಾಗವು ಅದೇ ತಾನೇ ಬೆಳೆಯುತ್ತಿದ್ದ ವರದಕ್ಷಿಣೆಗೆ ಖರ್ಚಾಗುತ್ತಿತ್ತು. ವರದಕ್ಷಿಣೆಯ ಪದ್ಧತಿ ಬಲವಾಗಿ ಬೆಳೆಯುತ್ತ ನಡೆದಂತೆ ಮದುವೆಯ ವೆಚ್ಚ ವನ್ನು ತಗ್ಗಿಸಲಾಯಿತು. ಮೊದಲಿಗೆ ಒಂದು ಶ್ರೀಮಂತ ಬ್ರಾಹ್ಮಣ ಕುಟುಂಬದ ಮದುವೆಯ ವೆಚ್ಚ ರೂ. ೧೦೦೦–೨೦೦೦ ಆಗುತ್ತಿದ್ದರೆ ವರದಕ್ಷಿಣೆಯು ಪ್ರಾರಂಭ ವಾದ ನಂತರ ರೂ. ೨೦೦ ರಿಂದ ೫೦೦ರ ವರೆಗೆ ಇಳಿಯಿತು. ಆದರೆ ಲಿಂಗಾಯತರಲ್ಲೂ ವರದಕ್ಷಿಣೆಯ ಪದ್ಧತಿ ಇನ್ನೂ ಆಗ ಪ್ರಾರಂಭವಾಗದ್ದರಿಂದ ಅವರು ಇತರೆಯವರಿಗಿಂತ ಹೆಚ್ಚು ಉಳಿತಾಯ ಮಾಡಲು ಸಹಾಯವಾಯಿತು. ಆದರೆ ಅವರ ಉಳಿತಾಯದ ಹೆಚ್ಚಿನ ಭಾಗ ತಂಟೆ ತಕರಾರು ಮುಂತಾದವುಗಳಿಗೆ ಹೆಚ್ಚು ವಿನಿಯೋಗವಾಗುತ್ತಿತ್ತು.

**ಬಂಡವಾಳ ಹೂಡಿಕೆ :** ೧೮೬೦ರ ನಂತರದ ದಶಕಗಳಲ್ಲಿ ಇಂಗ್ಲಿಷ್ ಕಂಪನಿ ಕಾನೂನಿನ ಅನ್ವಯ ವಾಗಿ ಪರಿಮಿತ (ಲಿಮಿಟೆಡ್) ಹೊಣೆಗಾರಿಕೆ ಆಧಾರದ ಮೇಲೆ ಅನೇಕ ಕಂಪನಿಗಳು ವ್ಯಾಪಾರ ದಂಧೆಗಳನ್ನು ಪ್ರಾರಂಭಿಸಿದವು. ಈ ಕೂಡು ಬಂಡವಾಳ ಸಂಸ್ಥೆಗಳು ಅನೇಕ ಜನರ ಉಳಿತಾಯವನ್ನು ಇಂದಿನಂತೆ ಅಂದೂ ಆಕರ್ಷಿಸಿದವು. ಕಾರಣ ಇವುಗಳು ನೀಡುವ ಲಾಭಾಂಶ ಬ್ಯಾಂಕುಗಳು ಮತ್ತು ಸರ್ಕಾರದ ಸೆಕ್ಯೂರಿಟಿಗಳಲ್ಲೂ ತೊಡಗಿಸಿದ ಹಣಕ್ಕೆ ಬರುವ ಆದಾಯಕ್ಕಿಂತ ಬಹೂ ಪಾಲು ಹೆಚ್ಚಾಗಿದ್ದರಿಂದ. ಉಳಿತಾಯ ಬ್ಯಾಂಕುಗಳಲ್ಲೂ

ಹಣ ತೊಡಗಿಸುವವರು ಬಹುಪಾಲು ಸರ್ಕಾರದ ನೌಕರರು ಆಗಿದ್ದರು. ೧೮೬೭ರಲ್ಲಿ ಏಪ್ರೀಲದಲ್ಲಿ 'ಧಾರವಾಡ ಕಂಪನಿ' ಎಂಬ ಹೆಸರಿನ ಬಟ್ಟೆಯ ಆಮದು-ರಫ್ತು ಕಂಪನಿ ಪ್ರಾರಂಭವಾಯಿತು.

ಇದು ಈ ಭಾಗದ ಬಹುದೊಡ್ಡ ಕಂಪನಿ ಆಗಿತ್ತು. ೧೮೮೩ ರಲ್ಲಿ ಅದರ ಷೇರು ಬಂಡವಾಳ ರೂ. ೪೦,೦೦೦ ಮತ್ತು ೧೪೩ ಜನ ಷೇರುದಾರರು ಇದ್ದರು. ಅವರಲ್ಲಿ ೧೩೨ ಜನ ಬ್ರಾಹ್ಮಣರು, ಅವರಲ್ಲಿ ಸುಮಾರು ೮೫ ಜನ ಸರ್ಕಾರಿ ನೌಕರರು ಆಗಿದ್ದರು. ೧೮೭೫ ರಿಂದ ೧೮೮೩ರ ಅವಧಿಯಲ್ಲಿ ಈ ಕಂಪನಿ ನೀಡಿದ ಡಿವಿಡೆಂಡ್ ೮ ರಿಂದ ೧೫% ಆಗಿತ್ತು. ಈ ಕಂಪನಿಯ ಒಂದು ಶಾಖೆಯು ೧೮೭೭ ರಲ್ಲಿ ಹುಬ್ಬಳ್ಳಿಯಲ್ಲಿ ಪ್ರಾರಂಭವಾಯಿತು. ಮುಂದಿನ ವರ್ಷ (೧೮೭೮) ಹುಬ್ಬಳ್ಳಿಯಲ್ಲಿ 'ಹುಬ್ಬಳ್ಳಿ ಕ್ಲಾಥ ಕಂಪನಿ' ಎಂಬ ಸ್ವತಂತ್ರ ಕಂಪನಿಯು ರೂ. ೨೨,೦೦೦ ಬಂಡವಾಳದೊಂದಿಗೆ ಪ್ರಾರಂಭವಾಯಿತು. ಈ ಕಂಪನಿಯು ಯುರೋಪದಿಂದ ಮತ್ತು ಮುಂಬಯಿಯಿಂದ ಯಾಂತ್ರೀಕೃತ ನೂಲನ್ನು ಮತ್ತು ಬೆಂಗಳೂರಿನಿಂದ ಸಕ್ಕರೆಯನ್ನು ಆಮದು ಮಾಡಿಕೊಳ್ಳುತ್ತಿತ್ತು. ಇದೂ ಸಹ ಷೇರುದಾರರಿಗೆ ಶೇ. ೧೨ ಡಿವಿಡೆಂಡ್ ನೀಡುತ್ತಿತ್ತು. ಮುಂದೆ ೧೮೮೧ ರಲ್ಲಿ ಹುಬ್ಬಳ್ಳಿಯಲ್ಲಿ 'ಸದರ್ನ ಮರಾಠಾ ಸ್ಪಿನ್ನಿಂಗ್ ಮತ್ತು ವೀವ್ಹಿಂಗ್' ಎಂಬ ಹೆಸರಿನ ಕಂಪನಿಯು ಅಂದು ಆರು ಲಕ್ಷ ರೂ. ಬಂಡವಾಳದೊಂದಿಗೆ ಪ್ರಾರಂಭವಾಯಿತು. ಬಹಳ ದಿನಗಳವರೆಗೆ ಈ ನೂಲಿನ ಗಿರಣಿ ಭಾರತ್‌ಮಿಲ್ ಎಂದು ಪ್ರಸಿದ್ಧವಾಗಿತ್ತು. ೧೮೮೨–೮೩ ರಲ್ಲಿ ಹುಬ್ಬಳ್ಳಿ ಮತ್ತು ಗದಗನಲ್ಲೂ ಅನುಕ್ರಮವಾಗಿ 'ರಾಬರ್ಟ್‌ಸನ್ ಬ್ರದರ್ಸ್' ಮತ್ತು ಕಂ. ಮತ್ತು ಕ್ರಿಸ್ಟೆಲ್ ಮತ್ತು ಕಂ. ಬಹುದೊಡ್ಡ ವ್ಯಾಪಾರಿ ಕಂಪನಿಗಳಾಗಿದ್ದವು.

ವ್ಯಾಪಾರಿ ಕಂಪನಿಗಳಲ್ಲಿ ಹಣದ ವಿನಿಯೋಗ ಹೆಚ್ಚಾಗಿದ್ದರಿಂದ, ಸ್ಥಳೀಯ ಜನರ ಪ್ರೋತ್ಸಾಹದ ಕೊರತೆಯಿಂದ, ಮತ್ತು ಬಹುಮುಖ್ಯವಾಗಿ ಹತ್ತಿಯ ವ್ಯಾಪಾರದಲ್ಲಿ ಉಂಟಾದ ಹಿಂಜರಿತದಿಂದ ೧೮೭೦ ರಲ್ಲಿ ಪ್ರಾರಂಭವಾದ ಬೊಂಬಾಯಿ ಬ್ಯಾಂಕಿನ ಹುಬ್ಬಳ್ಳಿ ಶಾಖೆಯನ್ನು ೧೧ ವರ್ಷದ ನಂತರ ಮುಚ್ಚಲಾಯಿತು. ಪುನಃ ೧೮೮೨ ರಲ್ಲಿ ಪ್ರಾರಂಭ ಮಾಡಿ ಎರಡು ವರ್ಷದ ನಂತರ ಅಂತಿಮವಾಗಿ ೧೮೮೪ ರಲ್ಲಿ ಮುಚ್ಚಲಾಯಿತು.

ಮುಂದೆ ೧೯೨೧ ಡಿಸೆಂಬರ್ ೧ ರಂದು ಹುಬ್ಬಳ್ಳಿಯಲ್ಲಿ 'ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ'ದ ಶಾಖೆ ಪ್ರಾರಂಭ ಆಗುವವರೆಗೆ ಈ ಜಿಲ್ಲೆಯಲ್ಲಿ ಸರ್ಕಾರಿ ವಲಯದ ಯಾವುದೇ ವಾಣಿಜ್ಯ ಬ್ಯಾಂಕುಗಳು ಪ್ರಾರಂಭವಾಗಲಿಲ್ಲ ಎಂದು ಹೇಳಬಹುದು. ನಂತರದ ದಶಕಗಳಲ್ಲೂ ಈ ಜಿಲ್ಲೆಯ ಬ್ಯಾಂಕಿಂಗ್ ಬೇಡಿಕೆಯನ್ನು ಸಹಕಾರಿ ವಲಯದ ಸ್ಥಳೀಯ ಬ್ಯಾಂಕುಗಳು ಮತ್ತು ದಕ್ಷಿಣಕನ್ನಡ ಜಿಲ್ಲೆಯ ಬ್ಯಾಂಕುಗಳು ಪೂರೈಸಿದವು.

**ಖಾಸಗಿ ಲೇವಾದೇವಿಗಾರರು ;** ಅಂದಿನ ಬ್ಯಾಂಕಿಂಗ್ ವ್ಯವಹಾರದ ಬಹುದೊಡ್ಡ ಭಾಗಿದಾರರು ಖಾಸಗಿ ಲೇವಾದೇವಿಗಾರರು, ಸಾವುಕಾರರು ಜನಪ್ರಿಯ ಬ್ಯಾಂಕರುಗಳಾಗಿದ್ದರು. ಲೇವಾದೇವಿ ಯಾವುದೇ ಒಂದು ಜನಾಂಗದ/ಕೋಮಿನವರಿಗೆ ಸೀಮಿತವಾಗಿರಲಿಲ್ಲ. ಆದಾಗ್ಯೂ ಈ ವ್ಯವಹಾರ ವಿಶೇಷವಾಗಿ ಬ್ರಾಹ್ಮಣರು, ಲಿಂಗಾಯಿತರು, ಕೋಮಟಿಗಳು ಮತ್ತು ಕೆಲವೇ ಮುಸ್ಲಿಮರಿಗೆ ಸೀಮಿತವಾಗಿತ್ತು. ಬ್ರಾಹ್ಮಣರು ಕೇವಲ ಲೇವಾದೇವಿ ಮಾಡಿದರೆ, ಲಿಂಗಾಯತರು ಚರ್ಮ, ಕೊಬ್ಬು, ವಿದೇಶಿ ಮದ್ಯ ವ್ಯಾಪಾರಗಳನ್ನು ಹೊರತುಪಡಿಸಿ ಇತರೇ ವ್ಯಾಪಾರದೊಂದಿಗೆ, ಕೋಮಟಿಗಳು ಚಿಲ್ಲರೇ ವ್ಯಾಪಾರದೊಂದಿಗೆ ಬಡ್ಡಿ ವ್ಯವಹಾರ ಮಾಡುತ್ತಿದ್ದರು.

ಕಂಪನಿಯ ರೂಪಾಯಿ ಮೂಲಕ ಲೇವಾದೇವಿ ವ್ಯವಹಾರ ನಡೆಯುತ್ತಿತ್ತು. ವಾರ್ಷಿಕ ವೈವಾಟಿನ ಆಧಾರದ ಮೇಲೆ ಲೇವಾದೇವಿಯವರನ್ನು ಮೊದಲನೆಯ ದರ್ಜೆ: (ರೂ. ಒಂದು ಲಕ್ಷದಿಂದ ಎರಡು ಲಕ್ಷ), ಎರಡನೇ ದರ್ಜೆ (೫,೦೦೦ ರಿಂದ ಒಂದು ಲಕ್ಷ ರೂ), ಮೂರನೇ ದರ್ಜೆ (ರೂ ೫,೦೦೦ ದಿಂದ ನೂರರವರೆಗೆ) ಎಂದು ವಿಂಗಡಿಸಲಾಗಿತ್ತು. ಅಂದು ಜಿಲ್ಲೆಯ ಧಾರವಾಡ-ಹುಬ್ಬಳ್ಳಿ, ಗದಗ, ಸವಣೂರುಗಳಲ್ಲಿ ವಿಶೇಷವಾಗಿ ಲೇವಾದೇವಿಗಾರರು ಇದ್ದರು. ೧೮೨೨ರಲ್ಲಿ ಬೆಳಗಾವಿಯ ಶಹಾಪುರದ ಬ್ಯಾಂಕರುಗಳು ಮತ್ತು ಮಿರಜ ಬ್ಯಾಂಕರುಗಳು ಹುಬ್ಬಳ್ಳಿ ಬ್ಯಾಂಕುಗಳ ಏಜೆಂಟರಾಗಿ ಕೆಲಸ ಮಾಡುತ್ತಿದ್ದರು. ಶಹಾಪುರದ (ಬೆಳಗಾವಿ) ಬ್ಯಾಂಕರು

ಗಳನ್ನು ಉಚ್ಚಮಟ್ಟದ ವಿಶ್ವಾಸಾರ್ಹ ಬ್ಯಾಂಕರುಗಳು ಎಂದು ಪರಿಗಣಿಸಲಾಗುತ್ತಿತ್ತು. ಅವರು ತಮ್ಮಲ್ಲಿಯ ಠೇವಣಿದಾರರಿಗೆ ಶೇ. ೧೧/೨ ರಿಂದ ೨ರ ವರೆಗೆ ಬಡ್ಡಿಯನ್ನು ಕೊಡುತ್ತಿದ್ದರು.

೧೮೮೩ ರಲ್ಲಿ ಹುಬ್ಬಳ್ಳಿಯಲ್ಲಿ ಸುಮಾರು ೭೦೦ ವ್ಯಾಪಾರಸ್ಥರಿದ್ದರು. ಇವರು ವಿಶೇಷವಾಗಿ ಲಿಂಗಾಯಿತರು, ಜೈನರು, ಕೋಮಟಿ, ಬ್ರಾಹ್ಮಣರು, ಗುಜರಾತಿಗಳಾಗಿದ್ದರು. ಇವರಲ್ಲಿ ಸುಮಾರು ೩೦೦ ಜನರ ವ್ಯಾಪಾರಿ ಬಂಡವಾಳ ರೂ. ೧೦,೦೦೦ ದಿಂದ ಒಂದು ಲಕ್ಷದವರೆಗೆ ಇತ್ತು. ಗದಗದಲ್ಲಿ ವೆಂಕಟದಾಸ ಎಂಬ ಗುಜರಾತಿ ವ್ಯಾಪಾರಿಯು ೧೦,೦೦೦ ರೂ. ವರೆಗೆ ಹುಂಡಿಯ ವ್ಯಾಪಾರ ಮಾಡುತ್ತಿದ್ದನು. ಗದಗ ಇಂದಿನಂತೆ ಅಂದೂ ಜಿಲ್ಲೆಯ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು.

ಬಡ್ಡಿಯ ದರ : ೧೮೭೯–೮೦ ರಲ್ಲಿ ಉಳಿತಾಯ ಖಾತೆಯ ಠೇವಣಿಗಳ ಮೇಲೆ ಸರ್ಕಾರ ನಿಗದಿಪಡಿಸಿದ್ದ ಬಡ್ಡಿ ದರವನ್ನು ೩ ೩/೪% ನಿಂದ ೪ ೧/೮ %ಗೆ ಏರಿಸಲಾಗಿತ್ತು ಮತ್ತು ಪ್ರತಿಯೊಂದು ಖಾತೆಯಲ್ಲಿನ ಗರಿಷ್ಠ ಠೇವಣಿ ಮೊತ್ತವನ್ನು ವರ್ಷಕ್ಕೆ ರೂ. ೩,೦೦೦ ದಿಂದ ೫,೦೦೦ ವರೆಗೆ ಏರಿಸಲಾಗಿತ್ತು. ಸಾವುಕಾರರು ವೈಯಕ್ತಿಕ ಜಾಮೀನು ಮತ್ತು ನಂಬಿಕೆಯ ಮೇಲೆ ನೀಡುವ ಸಾಲದ ಮೇಲೆ ಶೇ. ೧೨ ರಿಂದ ೨೪ರ ವರೆಗೆ ಬಡ್ಡಿ ವಿಧಿಸುತ್ತಿದ್ದರು. ವಸ್ತುಗಳು ಮತ್ತು ಆಭರಣದ ಮೇಲೆ ಶೇ. ೯ ರಿಂದ ೨೪%, ಬೆಳೆಯ ಆಧಾರದ ಮೇಲೆ ಶೇ. ೨೪–೩೬ ಬಡ್ಡಿಯನ್ನು ವಿಧಿಸಲಾಗುತ್ತಿತ್ತು. ವೃತ್ತಿ ನಿರತರಲ್ಲದ ಸಾವುಕಾರರು ಸಣ್ಣ ಸಾಲದ ಮೇಲೆ ಶೇ. ೧೮ ರಿಂದ ೩೭ ಬಡ್ಡಿಯನ್ನು ವಿಧಿಸುತ್ತಿದ್ದರು. ಇಂದಿನ ಬಡ್ಡಿಯ ದರಕ್ಕೆ ಹೋಲಿಸಿದರೆ ಅಂದಿನ ಬಡ್ಡಿಯ ದರ ಹೆಚ್ಚಾಗಿತ್ತು. ಮತ್ತು ಲೇವಾದೇವಿಗಾರರು ಸಾಲಗಾರರನ್ನು ವಿಶೇಷವಾಗಿ ಶೋಷಣೆ ಮಾಡುತ್ತಿದ್ದರು.

ಸಾಲಪಡೆದವರು ಮತ್ತು ಜೀತ ಪದ್ಧತಿ : ಸಾಮಾನ್ಯವಾಗಿ ಕೈಮಗ್ಗದ ನೇಕಾರರು, ಸ್ವತಃ ಜಮೀನು ಸಾಗುವಳಿ ಮಾಡುವವರು, ಬ್ರಾಹ್ಮಣರು, ಕ್ಷತ್ರಿಯರು, ಕೋಮಟಿಗಳು ಜಮೀನುದಾರರು ಸಾಲ ಮಾಡುತ್ತಿರಲಿಲ್ಲ. ವಸ್ತುರೂಪದಲ್ಲಿ ಪಡೆದ ಧಾನ್ಯದ ಸಾಲವನ್ನು ಹಿಂದಕ್ಕೆ ನೀಡುವಾಗ ತಾವು ಪಡೆದ ಪ್ರಮಾಣದ ಮೇಲೆ ಅರ್ಧದಿಂದ ಕಾಲುಭಾಗ ಹೆಚ್ಚಿಗೆ ಕೊಡಬೇಕಾಗುತ್ತಿತ್ತು. ಸಾಲಕ್ಕೆ ಆಧಾರವಾಗಿ ಜೀತ ಪದ್ಧತಿಯು ರೂಢಿಯಲ್ಲಿ ಇತ್ತು. ಅನೇಕ ಸಂದರ್ಭಗಳಲ್ಲಿ ಜೀತವನ್ನು ಕರಾರು ಸಹಿತ ನೋಂದಾಯಿಸಲಾಗುತ್ತಿತ್ತು. (ಸಿರಸಿ, ಸಿದ್ದಾಪುರ (೧೮೬೨) ಬೆಳಗಾವಿ ಜಿಲ್ಲೆಯ ಕೆಲವು ಭಾಗ) ಶ್ರಮಜೀವಿಗಳಲ್ಲದ ಇತರರೂ ಅಂದರೆ ಕಾರಕೂನರು, ಲೆಖ್ಖ ಬರೆಯುವವರೂ ಸಹ ಸಾವುಕಾರರಲ್ಲಿ ಜೀತ ಮಾಡುತ್ತಿದ್ದರು.

ಸಹಕಾರಿ ವಲಯದ ಬ್ಯಾಂಕುಗಳು : ಕರ್ನಾಟಕದಲ್ಲಿ ಸಹಕಾರಿ ಚಳುವಳಿಯ ಪ್ರಾರಂಭದ ತೊಟ್ಟಿಲು ತೂಗಿದ್ದು ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಕಣಗಿನಹಾಳ ಎಂಬ ಚಿಕ್ಕ ಗ್ರಾಮದಲ್ಲಿ, ೧೯೦೫ ಮೇ ತಿಂಗಳಲ್ಲಿ ಪ್ರಾಥಮಿಕ ಪತ್ತಿನ ವ್ಯವಸಾಯ ಸಹಕಾರಿ ಸಂಘವನ್ನು ಸ್ಥಾಪಿಸುವ ಮೂಲಕ. ಅದರಂತೆ ಪಟ್ಟಣ ಸಹಕಾರಿ ಬ್ಯಾಂಕು ಪ್ರಪಥಮವಾಗಿ ನಮ್ಮ ರಾಜ್ಯದಲ್ಲಿ ಗದಗ ಬೆಟಗೇರಿ ಅರ್ಬನ್ ಬ್ಯಾಂಕು ೧೯೦೫ ರಲ್ಲಿ (ಇಂದು ಅದು ಅಸ್ತಿತ್ವದಲ್ಲಿ ಇಲ್ಲ) ಗದಗ-ಬೆಟಗೇರಿ ನಗರದ ನೇಕಾರರಿಗೆ ನೆರವಾಗಲು ಈ ಬ್ಯಾಂಕನ್ನು ಹುಟ್ಟುಹಾಕಿದವರು ಅಂದಿನ ಒಬ್ಬ ಕ್ರೈಸ್ತ ಪಾದ್ರಿ ಎಂದು ಬಲ್ಲವರು ಹೇಳುವರು. ನಂತರ ೧೯೦೫ ರಲ್ಲಿ (ಡಿಸೆಂಬರದಲ್ಲಿ) ಎರಡನೆಯ ಅರ್ಬನ್ ಬ್ಯಾಂಕು ಬೆಂಗಳೂರಿನಲ್ಲಿ ಪ್ರಾರಂಭವಾಯಿತು. (ಸಿಟಿ ಕೋ-ಆಪರೇಟಿವ್ ಬ್ಯಾಂಕ್). ೧೯೦೬ ರಿಂದ ೧೯೪೯ರ ವರೆಗಿನ ೪೪ ವರ್ಷಗಳ ಅವಧಿಯಲ್ಲಿ ಈ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ೧೭ ಸಹಕಾರಿ ಬ್ಯಾಂಕುಗಳು ಮೂಡಿಬಂದವು. ಕರ್ನಾಟಕದ ಇತರ ಜಿಲ್ಲೆಗಳಲ್ಲಿ ಇದೇ ಅವಧಿಯಲ್ಲಿ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಸಹಕಾರಿ ಬ್ಯಾಂಕುಗಳು ಮೂಡಿ ಬರಲಿಲ್ಲ ಎಂಬುದು ಗಮನಾರ್ಹ. ಈ ಜಿಲ್ಲೆಯ ರಡ್ಡಿ ಸಹಕಾರಿ ಬ್ಯಾಂಕ್ (೧೯೧೪) ಇಂದು ೨೧ ಶಾಖೆಗಳನ್ನು ಜಿಲ್ಲೆಯಾದ್ಯಂತ ಮತ್ತು ಹೊರಗೆ ಸ್ಥಾಪಿಸಿದೆ. ಕರ್ನಾಟಕದಲ್ಲಿ ಯಾವ ನಗರ ಸಹಕಾರಿ ಬ್ಯಾಂಕು ಈ ಪ್ರಮಾಣದಲ್ಲಿ ಶಾಖೆಗಳನ್ನು ಹೊಂದಿರುವುದಿಲ್ಲ. ಈ ಕಾರಣದಿಂದಲೇ ಈ ಜಿಲ್ಲೆಯಲ್ಲಿ ಬಹು

ಸಂಖ್ಯೆಯಲ್ಲಿ ವಾಣಿಜ್ಯ ಬ್ಯಾಂಕುಗಳು ಮೂಡಿ ಬರಲಿಲ್ಲ ಎಂದು ತೋರುವದು. ಇಂದೂ ಈ ಜಿಲ್ಲೆಗೆ ನಗರ ಸಹಕಾರಿ ಬ್ಯಾಂಕುಗಳಲ್ಲಿ ಎರಡನೆಯ ಸ್ಥಾನ ಇದೆ(೩೬). ಮೊದಲನೆಯ ಸ್ಥಾನ ಬೆಳಗಾವ ಜಿಲ್ಲೆ (೪೧).

**ಸ್ಥಳೀಯ ವಾಣಿಜ್ಯ ಬ್ಯಾಂಕುಗಳು :** ಬೊಂಬಾಯಿ, ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಈ ಭಾಗದಲ್ಲಿ ಹಳೇ ಮೈಸೂರು ಪ್ರಾಂತ್ಯಕ್ಕಿಂತ ಸುಮಾರು ೩–೪ ದಶಕದ ನಂತರ ಸ್ವತಂತ್ರವಾದ ಸ್ಥಳೀಯ ವಾಣಿಜ್ಯ ಬ್ಯಾಂಕುಗಳು ಮೂಡಿಬಂದವು.

ಬೊಂಬಾಯಿ ಕರ್ನಾಟಕದಲ್ಲಿ ಮೊದಲ ವಾಣಿಜ್ಯ ಬ್ಯಾಂಕು ಪ್ರಾರಂಭವಾದದ್ದು ೧೯೦೮ ರಲ್ಲಿ ಆದಿಲ್ ಶಾಹೀ ನಗರವಾದ ಬಿಜಾಪುರದಲ್ಲಿ. 'ಯೂನಿಯನ್ ಬ್ಯಾಂಕ್ ಆಫ್ ಬಿಜಾಪುರ ಮತ್ತು ಸೊಲ್ಲಾಪುರ' ಎಂಬ ಸಂಸ್ಥೆಯ ಮೂಲಕ. (೫೬ ವರ್ಷಗಳ ಸೇವೆಯ ನಂತರ ಇದು ೧೯೬೪ರಲ್ಲಿ ಸಾಂಗಲಿ ಬ್ಯಾಂಕ್‌ನೊಂದಿಗೆ ವಿಲೀನವಾಯಿತು). ಧಾರವಾಡ ಜಿಲ್ಲೆಯಲ್ಲಿ ಮೊದಲಿಗೆ ವಾಣಿಜ್ಯ ಬ್ಯಾಂಕು ಪ್ರಾರಂಭವಾದದ್ದು ಐತಿಹಾಸಿಕ ನಗರ ಹಾನಗಲ್ಲಿನಲ್ಲಿ ೧೯೨೯ ರಲ್ಲಿ ಶ್ರೀ ಲಕ್ಷ್ಮೀ ಬ್ಯಾಂಕಿನೊಂದಿಗೆ. ನಂತರ ಹುಬ್ಬಳ್ಳಿಯಲ್ಲಿ 'ಸಿಟಿ ಬ್ಯಾಂಕ್' (೧೯೩೦), ಇದು ೩೬ ವರ್ಷದ ಸೇವೆಯ ನಂತರ ೧೯೬೬ ರಲ್ಲಿ ವಿಜಯ ಬ್ಯಾಂಕಿನೊಂದಿಗೆ ವಿಲೀನವಾಯಿತು. ತದನಂತರ ಪುನಃ ಹುಬ್ಬಳ್ಳಿಯಲ್ಲಿ 'ಬ್ಯಾಂಕ್ ಆಫ್ ಕರ್ನಾಟಕ' ೧೯೪೬ ರಲ್ಲಿ ಪ್ರಾರಂಭವಾಗಿ ಎರಡು ದಶಕದ ಸೇವೆಯ ನಂತರ ಇಂದಿನ ಕರ್ನಾಟಕ ಬ್ಯಾಂಕಿನೊಂದಿಗೆ ವಿಲೀನವಾಯಿತು.

**ಮರಾಠಿ ಕನ್ನಡದ ತುರುಸು :** ಕರ್ನಾಟಕ ಕಾಲೇಜು ಧಾರವಾಡದಲ್ಲಿ ಪ್ರಾರಂಭವಾಗುವ ಮುನ್ನ ಅಲ್ಲಿ (M. S. M.) ಮದ್ರಾಸ್ ಹಾಗೂ ಸದರ್ನ ಮರಾಠಾ ರೇಲ್ವೆಯ ಕಛೇರಿ ಇತ್ತು. ಅದರ ನೌಕರರಲ್ಲಿ ಹೆಚ್ಚಿನವರು ಮರಾಠಿಗಳಾಗಿದ್ದರು. ಇವರು ೧೯೦೭ ರಲ್ಲಿ ಪ್ರಾರಂಭಿಸಿದ ಸದರ್ನ ಮರಾಠಾ ಅರ್ಬನ್ನ ಸಹಕಾರಿ ಬ್ಯಾಂಕ್ (೧೯೫೬ ರಿಂದ ಮಹಾಲಕ್ಷ್ಮೀ ಬ್ಯಾಂಕ್) ಧಾರವಾಡ ನಗರದ ಮೊದಲನೆಯ ಸಹಕಾರಿ ಬ್ಯಾಂಕ್ ಎಂದು ಹೇಳಬಹುದು. 'ಮರಾಠಾ' ಹೆಸರಿನ ಬ್ಯಾಂಕ್ ಕನ್ನಡಿಗರ ಕೆಚ್ಚನ್ನು ಕೆರಳಿಸಿತು. ಅದರ ಫಲವಾಗಿ ದಿ|| ಶಾಂತವೀರಪ್ಪ ಮೆಣಸಿನಕಾಯಿ ಅವರು ಸ್ಥಾಪಿಸಿದ ಕೆ. ಸಿ. ಸಿ. ಬ್ಯಾಂಕ್ (೧೯೧೫) ಇಂದು ಧಾರವಾಡ ಜಿಲ್ಲೆಯ ಕೇಂದ್ರ ಸಹಕಾರಿ ಬ್ಯಾಂಕಾಗಿದೆ.

೧೯೧೦ರ ವೇಳೆಗೆ ಧಾರವಾಡ ಬ್ಯಾಂಕ್, ಅಂಕಲಗಿ ಬ್ಯಾಂಕ್, ಕರ್ನಾಟಕ ಇಂಡಸ್ಟ್ರಿಯಲ್ ಬ್ಯಾಂಕ್, ಜಯಲಕ್ಷ್ಮೀ ಬ್ಯಾಂಕ್ ಮುಂತಾದ ಸ್ಥಳೀಯ ಸಂಸ್ಥೆಗಳು ಧಾರವಾಡದಲ್ಲಿ ಪ್ರಾರಂಭವಾದವು ಎಂದು ಕೆಲವು ದಾಖಲೆಗಳು ತಿಳಿಸುತ್ತವೆ. ಆದರೆ ಮುಂದೆ ವಿಶ್ವ ಹಣಕಾಸಿನ ಮುಗ್ಗಟ್ಟಿನಲ್ಲಿ ೧೯೨೯–೩೦ರ ಸಮಯದಲ್ಲಿ ಈ ಬ್ಯಾಂಕುಗಳು ಅವಸಾನಗೊಂಡಂತೆ ತೋರುವದು.

ಧಾರವಾಡದ ಅಂಕಲಗಿ ಬ್ಯಾಂಕ್ ಕನಿಷ್ಠ 'ಒಂದು ಆಣೆಯ' ಠೇವಣಿ ಸ್ವೀಕರಿಸಿ ಈ ಭಾಗದಲ್ಲಿ ಇಂದಿನ ಸಿಂಡಿಕೇಟ್ ಬ್ಯಾಂಕ್ ಆರಂಭಿಸುವ ಮೊದಲೇ 'ಪಿಗ್ಮಿ ಡಿಪಾಜಿಟ್' ಯೋಜನೆಯನ್ನು ಪ್ರಾರಂಭಿಸಿತ್ತು ಎಂದು ಹಳೆಯ ದಾಖಲೆಗಳಿಂದ ತಿಳಿದು ಬರುವದು.

**ಹಣದ ವಿನಿಮಯದ ಗೊಂದಲ :** ಪೇಶ್ವೆಯವರ ಕಾಲದಲ್ಲಿ ಮಾರುಕಟ್ಟೆಯ ಬೆಳವಣಿಗೆಗೆ ಹೆಚ್ಚಿನ ಪ್ರೋತ್ಸಾಹ ಇತ್ತು. ಅವರು ಮಾರುಕಟ್ಟೆಯ ಅಭಿವೃದ್ಧಿಗೆ ಉಂಬಳಿ ಹಾಕಿ ಕೊಡುತ್ತಿದ್ದರು. ವರ್ತಕರಿಗೆ ಅನುಕೂಲವಾಗುವಂತೆ ಟಂಕಸಾಲೆಗಳನ್ನು ಪ್ರಾರಂಭಿಸುತ್ತಿದ್ದರು. ೧೮೩೬ರ ವರೆಗೆ ಅಂದರೆ ಕಂಪನಿ ರೂಪಾಯಿಯನ್ನು ಚಲಾವಣೆಯಲ್ಲಿ ತರುವವರೆಗೆ ೮ ಬಗೆಯ ಚಿನ್ನದ ವರಹಗಳು ಈ ಜಿಲ್ಲೆಯಲ್ಲಿ ಬಳಕೆಯಲ್ಲಿ ಇದ್ದವು. ೧೭೫೩ ರಲ್ಲಿ ಬಾಳಾಜಿ ಬಾಜಿರಾವ್ ಪೇಶ್ವೆ ಪ್ರಾರಂಭ ಮಾಡಿದ್ದ ಟಂಕಸಾಲೆ ೧೮೧೭ರ ವರೆಗೂ ಧಾರವಾಡದಲ್ಲಿ ಮುಂದುವರೆದಿತ್ತು. ಅಂದು ರೂಢಿಯಲ್ಲಿದ್ದ ಎಂಟು ಬಗೆಯ ಚಿನ್ನದ ವರಹಗಳು ಯಾವುವೆಂದರೆ ಗಜಪತಿ (ರೂ. ೪ ೧/೨), ಬಹಾದ್ದೂರಿ, ಹೊಸ ಇಕ್ಕೇರಿ (ರೂ. ೪ ೧/೨), ಹಳೇ ಇಕ್ಕೇರಿ, ಸುಲ್ತಾನಿ (ರೂ. ೪), ದುರ್ಗಿ, ಜಮುಕೇರಿ, ಮಾಗಡಿ (ರೂ. ೩ ೩/೪), ಧಾರವಾಡಿ, ನವಲಗುಂದಿ, ಬನವಾಸಿ, ಶಮಶೇರಿ, ಅಶ್ವಪತಿ, ವೆಂಕಟಪತಿ (ರೂ. ೨ ೧/೨), ಸಾತಾರಿ, ಅಲಮಗಿರಿ, ಕಂಠೀರಾಯಿ ಮತ್ತು ಸವಣೂರಿ

(ರೂ. ೩). (ಆವರಣದಲ್ಲಿ ಕೊಟ್ಟಿರುವ ಸಂಖ್ಯೆಯು ಕಂಪನಿ ಒಂದು ರೂಪಾಯಿಯೊಂದಿಗೆ ಇರುವ ವಿನಿಮಯ ದರ).

೧೮೩೦ ರಲ್ಲಿ ಹೊನ್ನಿನ ಬೆಲೆಯನ್ನು ಕಂಪನಿಯ ೩ ೧/೨ ರೂ.ಗೆ ಸಮವೆಂದು ನಿರ್ಧರಿಸಲಾಯಿತು. ಆದರೆ ಮಾರುಕಟ್ಟೆಯಲ್ಲಿ ವಿನಿಮಯ ದರ ರೂ. ೪ ಆಗಿತ್ತು. ಆದರಂತೆ ಧಾರವಾಡ ಕಲೆಕ್ಟರ್ ಸಂಬಳ ಅಂದು ರೂ.೩,೫೦೦. (೩೫೦ ಪೌಂಡ್ ಅಥವಾ ನೂರು ಹೊನ್ನು ಆಗಿತ್ತು). ಕಂಪನಿಯ ರೂಪಾಯಿ ಅಲ್ಲದೇ ೧೩ ಬಗೆಯ ವಿವಿಧ ಬೆಳ್ಳಿಯ ರೂಪಾಯಿಗಳು ಬಳಕೆಯಲ್ಲಿ ಇದ್ದವು. ಕಂಪನಿಯ ರೂಪಾಯಿಗಳ ವಿನಿಮಯ ದರ ಬೇರೆ ಬೇರೆ ರೂಪಾಯಿಗಳಿಗೆ ಬೇರೆ ಬೇರೆ ಆಗಿತ್ತು. ಕಂಪನಿಯ ೧೦೨ ರೂ. ಗೆ ಬೊಂಬಾಯಿ ಮತ್ತು ಸೂರತ್‌ನ ೧೦೪ ರೂ. ಪೂನಾದ ರೂ. ೯೬, ಬಾಗಿಲುಕೋಟೆ ರೂ. ೯೯, ಶಾಹಾಪುರ ರೂ. ೯೨, ಕಿತ್ತೂರಿ ರೂ. ೯೧, ಧಾರವಾಡ ರೂ. ೯೦, ಹೈದರಾಬಾದ್ ರೂ. ೮೮, ಪನ್ಹಾಳಿ ಮತ್ತು ಕೊಲ್ಹಾಪುರಿ ರೂ. ೬೫ ಈ ರೀತಿ ವಿನಿಮಯವಾಗುತ್ತಿದ್ದವು.

ಆದರೆ ಸ್ಥಳೀಯ ರೂಪಾಯಿಗಳ ಮೌಲ್ಯ ಕಂಪನಿ ರೂ, ಗಿಂತ ಹೆಚ್ಚಾಗಿತ್ತು. ಪೂನಾ ಮತ್ತು ಸಾತಾರಗಳಲ್ಲಿ ತಾಮ್ರದ ದುಡ್ಡಿನ ಭಾಗಾಂಶವಾಗಿ ಕವಡಿ ಮತ್ತು ಚಿಪ್ಪುಗಳನ್ನು ಉಪಯೋಗಿಸುತ್ತಿದ್ದರು. ಆದರೆ ಬೊಂಬಾಯಿ ಕರ್ನಾಟಕದಲ್ಲಿ ಕವಡಿ ಮತ್ತು ಚಿಪ್ಪುಗಳ ಬಳಕೆ ಇರಲಿಲ್ಲ. ಪೇಶ್ವೆಯವರ ಮಾಂಡಲಿಕರಲ್ಲಿ ಹಲವರು ತಮ್ಮದೇ ಆದ ನಾಣ್ಯಗಳನ್ನು ಟಂಕಿಸುತ್ತಿದ್ದರು. (ಉದಾ : ಬಾಗಲಕೋಟೆಯಲ್ಲಿ ಮಲ್ಹಾರಶಾಹಿ ರಾಸ್ತೆ ಸರ್ಕಾರ ೧೮೩೩ರ ವರೆಗೆ, ಮುಧೋಳದಲ್ಲಿ ಘೋರ್ಪಡೆ ೧೮೨೦ರ ವರೆಗೆ).